ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 06 ನೇ ಮಾರ್ಚ್, 2020

`ನಮ್ಮ ಗ್ರಾಮ-ನಮ್ಮ ರಸ್ತೆ' ಯೋಜನೆಯ ಕಾಮಗಾರಿಗಳ ಕುರಿತು

ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

266 (444) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) "ನಮ್ಮ ಗ್ರಾಮ-ನಮ್ಮ ರಸ್ತೆ" ಯೋಜನೆಯಲ್ಲಿ ಮಂಡ್ಯ ಜಿಲ್ಲೆಯಲ್ಲಿನ ರಸ್ತೆಗಳ ಅಭಿವೃದ್ಧಿಗಾಗಿ ಎಷ್ಟು ಅಂದಾಜು ಮೊತ್ತವನ್ನು ಯಾವ ಯಾವ ರಸ್ತೆಗಳನ್ನು ವಿವಿಧ ಹಂತದಲ್ಲಿ ಪರಿಗಣಿಸಲಾಗಿದೆ ; (ತಾಲ್ಲೂಕುವಾರು ವಿವರ ನೀಡುವುದು)

(ಆ) ಮಂಡ್ಯ ಜಿಲ್ಲೆಯ ಯಾವ ಯಾವ ರಸ್ತೆಗಳು ಉಚಿತ ನಿರ್ವಹಣೆ ಮತ್ತು ದುರಸ್ಥಿ ಕೈಗೊಳ್ಳುವ ಕರಾರಿನಲ್ಲಿವೆ ; ಅದರಂತೆ ಉಚಿತ ನಿರ್ವಹಣೆ ಮತ್ತು ದುರಸ್ಥಿ ಮಾಡಲಾಗಿದೆಯೇ ;

(ಇ) ಹಾಗಿದ್ದಲ್ಲಿ, ಅಂತಹ ರಸ್ತೆಗಳು ಯಾವುವು ; ಯಾವಾಗ ಮಾಡಲಾಗಿದೆ ; (ತಾಲ್ಲೂಕುವಾರು ವಿವರ ನೀಡುವುದು)

(ಈ) "ನಮ್ಮ ಗ್ರಾಮ-ನಮ್ಮ ರಸ್ತೆ" ಯೋಜನೆಯಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಹಾಗೂ ಇತರ ಯೋಜನೆಯಲ್ಲಿ ಪರಿಗಣಿಸಿದ ರಸ್ತೆಗಳು ಯಾವುವು ; ಇವುಗಳ ಕಾಮಗಾರಿಯ ಹಂತವೇನು ; (ಪೂರ್ಣ ಮಾಹಿತಿ ನೀಡುವುದು)

(ಉ) ಕೆಲವು ರಸ್ತೆಗಳು ಆರಂಭದ ಹಂತದಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಊ) ಬಂದಿದ್ದಲ್ಲಿ, ಅವುಗಳ ಕಾಮಗಾರಿಗಳನ್ನು ಯಾವಾಗ ಆರಂಭಿಸಿ ಪೂರ್ಣಗೊಳಿಸಲಾಗುವುದು ?